# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 183 |
| 2 | ಸದಸ್ಯರ ಹೆಸರು | ಶ್ರೀ ಕೆ.ಟಿ.ಶ್ರೀಕಂಠೇಗೌಡ( ಪದವೀಧರರ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 16.02.2022 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಎಲ್ಲಾ ಭೂಮಿಯನ್ನು ಯಾವಾಗ ಪೂರ್ತಿಯಾಗಿ ಸರ್ವೆ ಮಾಡಲಾಯಿತು; ಆಗಿನ ಮೈಸೂರು ಸಂಸ್ಥಾನದ ಬ್ರಿಟಿಷ್ ಕಮಿಷನರ್ ಯಾರಾಗಿದ್ದರು; (ವಿವರವಾದ ಮಾಹಿತಿ ನೀಡುವುದು) | ರಾಜ್ಯದಲ್ಲಿನ ಎಲ್ಲಾ ಭೂಮಿಯ ಅಳತೆಯನ್ನು ಆಯಾಯ ಪ್ರಾಂತ್ಯಗಳ ಭೌಗೋಳಿಕ ಸ್ಥಿತಿಗನುಗುಣವಾಗಿ ವಿವಿಧ ಕಾಲಘಟ್ಟದಲ್ಲಿ ಈ ಕೆಳಕಂಡಂತೆ ಪ್ರಾಂತ್ಯವಾರು ಮೂಲ ಸರ್ವೆ ಮತ್ತು ರೀಸರ್ವೆ ಕಾರ್ಯವನ್ನು ಪೂರೈಸಲಾಗಿದೆ (see table below). ಮೂಲ ಸರ್ವೆ ಅವಧಿಯಲ್ಲಿ ಆಗಿನ ಮೈಸೂರು ಸಂಸ್ಥಾನದಲ್ಲಿ ಶ್ರೀ ಬೌರಿಂಗ್ ರವರು ಬ್ರಿಟಿಷ್ ಕಮಿಷನರ್ (ಚೀಫ್ ಕಮಿಷನರ್ ) ಆಗಿದ್ದರು. |
| ಆ) | ಅಂದಿನ ಕಾಲದಲ್ಲಿ ಮಹಾರಾಜರು ಗ್ರಾಮ ಮತ್ತು ಭೂಮಿಗಳನ್ನು ಯಾವ ರೀತಿಯಲ್ಲಿ ದಾನವಾಗಿ ಯಾರ್ಯಾರಿಗೆ ನೀಡಿದ್ದರು; ಅವುಗಳನ್ನು ಸರ್ವೆ ಕಾಲದಲ್ಲಿ ಯಾವ ರೀತಿ ಉಲ್ಲೇಖಿಸಲಾಗಿದೆ (ವಿವರದೊಂದಿಗೆ ಮಾಹಿತಿ ನೀಡುವುದು) | ಅಂದಿನ ಕಾಲದಲ್ಲಿ ಮಹಾರಾಜರು ಯಾವುದಾರರು ವಿಶೇಷ/ವಿಶಿಷ್ಟ/ಧಾರ್ಮಿಕ/ಸಾಮಾಜಿಕ ಇತ್ಯಾದಿ ಸೇವೆ ಸಲ್ಲಿಸಿದ ಜನರಿಗೆ ಯಾವುದೇ ಒಂದು ಅಥವಾ ಹಲವಾರು ಸರ್ವೆ ನಂಬರು /ಭಾಗಶಃ ಗ್ರಾಮ/ಒಂದು ಗ್ರಾ,ಮ/ಗ್ರಾಮಗಳ ಗುಂಪುಗಳನ್ನು ಇನಾಂ/ ಉಡುಗೊರೆ/ ಭಕ್ಷೀಸ್ ಆಗಿ ಕಂದಾಯ ಆಕರಣೆಯ ನಿಬಂಧನೆಯೊಂದಿಗೆ (ಸಂಪೂರ್ಣ/ ಭಾಗಶಃ ಕಂದಾಯ ವಿನಾಯತಿ, ಇತ್ಯಾದಿ) ನೀಡುತ್ತಿದ್ದರು. ಸದರಿ ಜಮೀನುಗಳ ಕುರಿತು ಮೂಲ/ರೀ-ಸರ್ವೆ ಕಾಲದಲ್ಲಿ ಇನಾಂ ನಿಬಂಧನೆಯಂತೆ ಭೂ ದಾಖಲೆಗಳನ್ನು ತಯಾರಿಸಿ ನಿರ್ವಹಿಸಲಾಗಿದೆ. ಇಂತಹ ಗ್ರಾಮ ನಕಾಶೆಗಳಲ್ಲಿ ಗ್ರಾಮದ ಹೆಸರಿನ ಮೊದಲು ಜೋಡಿ, ಕಾಯಂಗುತ್ತಾ ಇತ್ಯಾದಿ ಸೂಚಕಗಳನ್ನು ನಮೂದಿಸಿ ಗುರಿತುಸಲಾಗಿದೆ. |

| ಕ್ರ. ಸಂ | ಪ್ರಾಂತ್ಯ | ಮೂಲ ಸರ್ವೆ | ರಿ-ಸರ್ವೇ |
|---|---|---|---|
| 1 | ಹಳೇ ಮೈಸೂರು ಪ್ರಾಂತ್ಯ | 1863-1899 | 1900-1917 |
| 2 | ಮುಂಬೈ ಪ್ರಾಂತ್ಯ | 1840-1863 | 1906-1921 |
| 3 | ಮದರಾಸು ಪ್ರಾಂತ್ಯ | 1863-1904 | 1923-1935 |
| 4 | ಹೈದರಾಬಾದ್ ಪ್ರಾಂತ್ಯ | 1875-1888 | 1906-1916 |
| 5 | ಕೊಡಗು ಪ್ರಾಂತ್ಯ | 1806-1816 | 1906-1912 |

| | | |
|---|---|---|
| ಇ) | ಜೋಡಿ ಗ್ರಾಮ, ಅಮೃತ ಮಹಲ್ ಕಾವಲ್ ಸರ್ವೆಯಲ್ಲಿ ಇವುಗಳ ಅರ್ಥ ವಿವರಣೆ ಏನಿದೆ (ವಿವರವಾದ ಮಾಹಿತಿ ನೀಡುವುದು) | ಭೂದಾಖಲೆಗಳ ಪ್ರಕಾರ ಜೋಡಿ ಗ್ರಾಮ, ಅಮೃತ ಮಹಲ್ ಕಾವಲ್ ಸರ್ವೆಯಲ್ಲಿ ಇವುಗಳ ಅರ್ಥ ವಿವರಣೆ ಈ ಕೆಳಕಂಡಂತಿದೆ<br>1) **<u>ಜೋಡಿ ಗ್ರಾಮ</u>**:- ಸರ್ಕಾರದಿಂದ (ಮಹಾರಾಜರಿಂದ) ಶೇಕಡಾ 50% ರಷ್ಟು ಕಂದಾಯ ವಿನಾಯತಿ ಪಡೆದ /ಕಡಿಮೆ ಕಂದಾಯ ನಿಗಧಿ ಮಾಡಿದ ಧಾರ್ಮಿಕ ದತ್ತಿ ಗ್ರಾಮ/ಜಮೀನು.<br>2) **<u>ಅಮೃತ ಮಹಲ್ ಕಾವಲ್</u>**:- ಮಹಾರಾಜರು ಸ್ಥಳೀಯ ಗೋತಳಿ ಸಂರಕ್ಷಣೆ ಮತ್ತು ಅಭಿವೃದ್ಧಿ ಸಲುವಾಗಿ ಕಾಯ್ದಿರಿಸಿದ ಗೋಮಾಳ ಅಥವಾ ಕಾವಲ್ ಜಮೀನು. |
| ಈ) | ಸರ್ವೆ ಇಲಾಖೆಯಲ್ಲಿ ಬರುವ ದಾಖಲೆಗಳು ಯಾವುವು; ಅವುಗಳ ಹೆಸರು ಮತ್ತು ಅವುಗಳ ಮಹತ್ವವೇನು; (ವಿವರವಾದ ಮಾಹಿತಿ ನೀಡುವುದು) | ಭೂಮಾಪನ ಇಲಾಖೆಯಲ್ಲಿನ ಪ್ರಮುಖ ದಾಖಲೆಗಳು ಮತ್ತು ಅವುಗಳ ವಿವರಣೆ ಈ ಕೆಳಗಿನಂತಿರುತ್ತದೆ.<br>1) **ಟಿಪ್ಪಣಿ:-** ಮೂಲ/ರೀಸರ್ವೆ ಕಾಲದ ಅಳತೆ ಸಂದರ್ಭದಲ್ಲಿ ಸ್ಕೇಲ್ . ಪ್ರಮಾಣಕ್ಕನುಗುಣವಾಗಿ ಇಲ್ಲದಿರುವ ಕಚ್ಚಾ ನಕ್ಷೆ ರಚಿಸಿ, ಜಮೀನಿನ ಅಳತೆ, ಕರ್ದಾ, ಖರಾಬು, ಇತ್ಯಾದಿ ವಿವರ ನಮೂದಿಸಿರುವ ದಾಖಲೆ.<br>2) **ಪಕ್ಕಾ ಪುಸ್ತಕ:-** ಮೂಲ/ರೀಸರ್ವೆ ಕಾಲದ ಅಳತೆ ಸಂದರ್ಭದಲ್ಲಿ ತಯಾರಿಸಿರುವ ಟಿಪ್ಪಣಿಯ ಅಳತೆ ಗಳನ್ನು ಪರಿಶೀಲಿಸಿ ನಿಗದಿತ ಸ್ಕೇಲ್‌ಗೆ ಅನುಗುಣವಾಗಿ ನಕಾಶೆ ತಯಾರಿಸಿ, ವಸಲಾವಾರು ಕ್ಷೇತ್ರದ ಲೆಕ್ಕಾಚಾರ ಮಾಡಿ ಸರ್ವೆ ನಂಬರಿನ ವಿಸ್ತೀರ್ಣ, ಕರ್ದಾ ವಿವರ, ಜಮೀನಿನಲ್ಲಿರುವ ಕಲ್ಲುಗಳ ಸಂಖ್ಯೆ, ಸರ್ಕಾರಿ/ ಖಾಸಗಿ ಇತ್ಯಾದಿ ಮಾಹಿತಿ ದಾಖಲಿಸಿರುವ ಪುಸ್ತಕ.<br>3) **ಆಕಾರಬಂದು:-** ಒಂದು ಜಮೀನಿನ ಒಟ್ಟು ಕ್ಷೇತ್ರ, ಖರಾಬು, ಬಾಬುವಾರು ವಿಂಗಡಣೆ, ನೀರಿನ ಆಶ್ರಯ, ಕಂದಾಯದ ಲೆಕ್ಕಾಚಾರ ಇತ್ಯಾದಿ ಮಾಹಿತಿ ದಾಖಲಿಸಿರುವ ತಃಖ್ತೆ.<br>4) **ಅಟ್ಲಾಸ್:-** ಜಮೀನಿನ ಹಿಸ್ಸಾ ನಕಾಶೆಯನ್ನು ಸ್ಕೇಲ್‌ಗೆ ಅನುಗುಣವಾಗಿ ತಯಾರಿಸಿದ ದಾಖಲೆ.<br>5) **ಪ್ರತಿ ಪುಸ್ತಕ:-** ಕಂದಾಯ ನಿಗದಿ ಕುರಿತು ಜಮೀನಿನ ನೆಲ ಪ್ರತಿ ಮಾಡಿ ಭಾಗಾಣೆ, ನೀರಿನ ಆಶ್ರಯ, ಪೋಟ್ ಖರಾಬು ಕರ್ದಾ ವಿವರ, ಇತ್ಯಾದಿ ಮಾಹಿತಿಗಳನ್ನು ನಮೂದಿಸಿರುವ ದಾಖಲೆ.<br>6) **ರೀ-ಕ್ಲಾಸ್ ಪ್ರತಿ:-** ರೀ-ಕ್ಲಾಸಿಫಿಕೇಷನ್ ಸಮಯದಲ್ಲಿ ಸರ್ವೆ ನಂಬರಿನಲ್ಲಿನ ಬೆಳೆ ಮತ್ತು ನೀರಿನ ಮೂಲದ ಅನುಗುಣವಾಗಿ ಭೂಮಿಯ ತರಹೆಯಲ್ಲಿನ ಬದಲಾವಣೆ ಮತ್ತು ಜಮೀನು ಸ್ಥಿತಿಯಂತೆ ಖರಾಬು |

| | | |
|---|---|---|
| | | ಹೆಚ್ಚಿಸಿರುವ ಅಥವಾ ತಗ್ಗಿಸಿ ನಮೂದಿಸಿರುವ ದಾಖಲೆ.<br>7) **ಹಿಸ್ಸಾ ಟಿಪ್ಪಣಿ:-** ಹಿಸ್ಸಾ ಸರ್ವೆ ಕಾಲದಲ್ಲಿ ಜಮೀನಿನಲ್ಲಿ ಇರುವ ಹಿಸ್ಸಾಗಳ ಅಳತೆ ಮಾಡಿ ಸ್ಕೇಲ್ ಪ್ರಮಾಣಕ್ಕೆ ಇಲ್ಲದಂತೆ ಕಚ್ಚಾ ನಕ್ಷೆ ರಚಿಸಿ ಹಿಸ್ಸಾ ವಿಭಾಗಿಸಿ ಅಳತೆ, ಕರ್ದಾ ಖರಾಬು ಹಂಚಿಕೆ ಇತ್ಯಾದಿ ವಿವರಗಳನ್ನು ನಮೂದಿಸಿರುವ ದಾಖಲೆ<br>8) **ಹಿಸ್ಸಾ ಪಕ್ಕಾ ಪುಸ್ತಕ**:-ಹಿಸ್ಸಾ ಸರ್ವೆ ಕಾಲದಲ್ಲಿ ಹಿಸ್ಸಾ ತಯಾರಿಸಿರುವ ಟಿಪ್ಪಣಿಯ ಅಳತೆಗಳನ್ನು ಪರಿಶೀಲಿಸಿ ನಿಗಧಿತ ಸ್ಕೇಲ್ ಅನುಗುಣವಾಗಿ ನಕಾಶೆ ತಯಾರಿಸಿ, ಹಿಸ್ಸಾವಾರು ಕ್ಷೇತ್ರದ ಲೆಕ್ಕಾಚಾರ, ಖರಾಬು, ಬಾಬುವಾರು ವಿಂಗಡಣೆ ಮಾಡಿ ಸರ್ವೆ ನಂಬರಿನ ವಿಸ್ತೀರ್ಣ, ಹಿಸ್ಸಾದಾರರ ವಿವರ ಇತ್ಯಾದಿ ಮಾಹಿತಿ ದಾಖಲಿಸಿರುವ ಪುಸ್ತಕ.<br>9) **ಗ್ರಾಮ ನಕಾಶೆ:-** ಸರ್ವೆ ನಂಬರುಗಳ ಬಾಬ್ತು ಮೂಲ/ ರೀಸರ್ವೆ ಸಮಯದಲ್ಲಿ ತಯಾರಿಸಿದ ಟಿಪ್ಪಣಿಗಳನ್ನು ಜಂಟಿಯಾಗಿ ನಿಗದಿತ ಸ್ಕೇಲ್‌ಗೆ ಅನುಗುಣವಾಗಿ ರಚಿಸಿ, ಖರಾಬು ಚಿಹ್ನೆ, ಗ್ರಾಮದ ಲಾಗು ಗ್ರಾಮಗಳ ವಿವರ ಇತ್ಯಾದಿ ವಿವರವನ್ನು ದಾಖಲಿಸಿರುವ ನಕಾಶೆ ಯಾಗಿರುತ್ತದೆ. |
| ಉ) | ಈ ದಾಖಲೆಗಳನ್ನು ಡಿಜಿಟಲೀ ಕರಣಗೊಳಿಸಲು ಇಲ್ಲಿಯವರೆಗೆ ಎಷ್ಟು ಹಣ ಖರ್ಚು ಮಾಡ ಲಾಗಿದೆ? (ವಿವರವಾದ ಮಾಹಿತಿ ನೀಡುವುದು) | ಭೂದಾಖಲೆಗಳ ಸ್ಕ್ಯಾನಿಂಗ್‌ಗಾಗಿ ಕೇಂದ್ರ ಪುರಸ್ಕೃತ ಯೋಜನೆಯಡಿ 884.00 ಲಕ್ಷ ರೂಪಾಯಿಗಳನ್ನು ಮತ್ತು ಆಕಾರಬಂದುಗಳ ಡಿಜಿಟಲೀಕರಣಕ್ಕಾಗಿ DILRMP ಯೋಜನೆಯಡಿ ರೂ.323.14 ಲಕ್ಷ ರೂಪಾಯಿಗಳು ಸೇರಿದಂತೆ ಒಟ್ಟು 1207.14 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ. |

<u>**ಸಂಖ್ಯೆ: ಕಂಇ 19 ಎಸ್‌ಎಸ್‌ಸಿ 2022**</u>

**(ಆರ್.ಅಶೋಕ)**
ಕಂದಾಯ ಸಚಿವರು